॥ ಶ್ರೀಃ ॥

॥ ಶ್ರೀ ಮೂಲಗೋಪಾಲಕೃಷ್ಣೋ ವಿಜಯತೇ ॥

॥ ಶ್ರೀ ವ್ಯಾಸರಾಜ ಗುರುಸಾರ್ವಭೌಮೋ ವಿಜಯತೇ ॥

# ಶ್ರೀ ವಿದ್ಯಾಪಯೋನಿಧಿತೀರ್ಥಗುರುಸ್ತುತಿಃ



ಲೇಖಕರು : ಶ್ರೀ ಭೂಪಾಲ ಹರಿಭಕ್ತ್ಯೋಪಾಹ್ವ

**ಪಂಡಿತ ಆನಂದ ತೀರ್ಥಾಚಾರ್ಯ**

ಆತ್ಮಕೂರು-518 422. ಕರ್ನೂಲು ಜಿಲ್ಲಾ (ಆಂಧ್ರ)

ಸಂಪಾದಕರು : **ಡಾ॥ ಕಂಬಾಲೂರು ವೆಂಕಟೇಶಾಚಾರ್ಯ**

ಪ್ರಕಾಶಕರು : **ಶ್ರೀ ವ್ಯಾಸರಾಜ ಮಠ - ವಿಷ್ಣುಯಾಗ ನಿಧಿ**

**ಕರ್ನೂಲು.**

# <u>ಸಂಪಾದಕನ ಮಾತು</u>

ಪರಮಪೂಜ್ಯ ಶ್ರೀ ಕಂಬಾಲು ರಾಮಚಂದ್ರ ತೀರ್ಥರ ಅನಂತರ
ಆಂಧ್ರದಲ್ಲಿ ಶ್ರೀಮಠದ ಕೀರ್ತಿ ಪತಾಕೆಯನ್ನು ಸ್ಥಾಪಿಸಿದ
ಮಹಾನುಭಾವರು ನಮ್ಮ ಪರಮಪೂಜ್ಯ ಗುರುಗಳಾದ
**ಶ್ರೀಶ್ರೀ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು.**
ಅವರ ಮಹಿಮೆಗಳ ಅನುಭವ ಆಂಧ್ರದ ಅನೇಕ ಜನರಿಗೆ
ಅರಿವಾಗಿದೆ. ಈ ಗುರು ಸ್ತುತಿಯನ್ನು ರಚನೆ ಮಾಡಿದ
*ಪಂಡಿತ ಆನಂದ ತೀರ್ಥಾಚಾರ್ಯ ಭೂಪಾಲ ಹರಿಭಕ್ತೋಪಾಹ್ವ*
(ಆತ್ಮಕೂರು) ಅವರಿಗೆ ಈ ಅನುಭವವು
ತಮ್ಮ ಅನುಜನ ಅಪಮೃತ್ಯು ಪರಿಹಾರರೂಪ ಪವಾಡದಿಂದಾಗಿ
ಒದಗಿಬಂದಿದೆ. ಇದೇ ಅವರ ಭಕ್ತ್ಯತಿಶಯೋಕ್ತ್ಯಲಂಕೃತ ಸ್ತುತಿ
ಕಾವ್ಯವಾಗಿ ಹೊರಹೊಮ್ಮಿ ಈ ರೂಪದಲ್ಲಿ ರಚಿತವಾಗಿದೆ.

ದಯೆಯಿಂದ ನಮ್ಮ ಪರಮಪೂಜ್ಯ
**ಶ್ರೀಶ್ರೀ ವಿದ್ಯಾವಾಚಸ್ಪತಿ ತೀರ್ಥ ಶ್ರೀ ಪಾದಂಗಳವರು** ತಮ್ಮ
ಅನುಗ್ರಹ ವಚನ ರೂಪಮುನ್ನುಡಿಯಿಂದ
ಈ ಸ್ತುತಿ ಕಾವ್ಯ ವನ್ನೂ, ಲೇಖಕರನ್ನು, ಆಶೀರ್ವದಿಶಿರುವರು.
ಪೂಜ್ಯ ಗುರುಗಳಿಗೆ ಸಾಷ್ಟಾಂಗ ಪ್ರಣಾಮಗಳು.

ಪಂಡಿತ ಆನಂದ ತೀರ್ಥಾಚಾರ್ಯರು ದೊಡ್ಡ ವೈಯ್ಯಾಕ
ರಣಿಗಳೂ. ಕಾವ್ಯ ರಚನಾಚತುರರು. ನಿರಾಡಂಬರರು.
ಪಂಡಿತ ಕವಿಗಳಾದ ಆಚಾರ್ಯರಿಗೆ ನನ್ನ ಕೃತಜ್ಞತೆಗಳನ್ನು
ತೆಳಿಸಿ ಕೊಳ್ಳುತ್ತೇನೆ.

ಇತಿ ಸಾಧುಸಜ್ಜನ ವಿಧೇಯ
ಕಂಬಾಲೂರು ವೇಂಕಟೇಶ ಆಚಾರ್ಯ

॥ ಶ್ರೀಃ ॥

॥ ಶ್ರೀ ಹರಿಶ್ಶರಣಮ್ಮಮ ॥

# ಶ್ರೀ ವಿದ್ಯಾಪಯೋನಿಧಿತೀರ್ಥಗುರುಸ್ತುತಿಃ

ಮೂ. *ಶ್ರೀ ವ್ಯಾಸಮುಷ್ಟಿಗೋಪಾಲಕೃಷ್ಣ ಪೂಜಾಧುರಂಧರಮ್ ॥*

★ *ತಂ ಬುಧಾನವರಂ ವಿದ್ಯಾಪಯೋನಿಧಿಗುರುಂ ಭಜೇ ॥* 1

ಶ್ರೀಮನ್ಮಧ್ವಕರಾರ್ಚಿತ ಶ್ರೀವ್ಯಾಸಮುಷ್ಟಿ ಶ್ರೀಮೂಲಗೋಪಾಲಕೃಷ್ಣಾದಿ ದಿವ್ಯ ಪ್ರತಿಮೆಗಳ ಪೂಜಾ ಮಾಡುವದರಲ್ಲಿ ಧುರಂಧರರು, ವೇದಾದಿ ಸಕಲ ಸಚ್ಛಾಸ್ತ್ರ ಸಂಪನ್ನರಾದಗುರುವರೇಣ್ಯರು, ಶ್ರೀಮದ್ವ್ಯಾಸರಾಜರ ವಿದ್ಯಾಕರ್ನಾಟಕ ಸಿಂಹಾಸ-ನಾಧೀಶ್ವರರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರ ಚರಣಕಮಲಗಳನ್ನು ಸೇವಿಸುತ್ತೇನೆ.

★ ಬುಧಾನಃ=(ಯುಧಿಬುದಿದೃಶೇಃಕಿಚ್ಚ) ವೇದಾದಿಸಕಲ ಸಚ್ಛಾಸ್ತ್ರವೇತ್ತಾಗುರುಃ ॥

ಮೂ. *ವಿಸ್ಮೃತಾಯಾ ಮಾಧ್ವರೀತೇರುದ್ಧರ್ತಾರಂ ಪುನಃ ಪುನಃ ॥*

★ *ಅಪಮೃತ್ಯುಹರಂ ವಿದ್ಯಾಪಯೋನಿಧಿಗುರುಂ ಭಜೇ ॥* 2

ಸರ್ವೋತ್ಕೃಷ್ಟವಾದ ಶ್ರೀಮಾಧ್ವಪದ್ಧತಿಯನ್ನು ವಿಸ್ಮೃತರಾದಂಥಾ ಸಕಲ ಮಾಧ್ವರನ್ನು ಪುನಃ ಪುನಃ ಸದುಪದೇಶಗಳಿಂದ ಅನುಗ್ರಹಿಸಿ ಸಮುದ್ಧರಿಸುವಂತಹವರು ಮತ್ತು ಅಕಾಲ ಮೃತ್ಯುನಿವಾರಣೆಯನ್ನು ಮಾಡಿ ಪ್ರಾಣದಾನಮಾಡಿ ಪುನರುಜ್ಜೀವಿಸುವಂತೆ ಮಾಡುವ ಮಹಾಸಾಮರ್ಥ್ಯವುಳ್ಳ ಮಹಾಯೋಗಿಗಳಾದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರ ಚರಣಕಮಲಗಳನ್ನು ಸೇವಿಸುತ್ತೇನೆ.

★ "ಅಪಮೃತ್ಯುಃ=ಶ್ರೀ ಪೂಜ್ಯವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರ ೭೫ನೇ ಜನ್ಮ ದಿನೋತ್ಸವ ಸಂದರ್ಭದಲ್ಲಿ ನಾನು ಬೆಂಗಳುರಿಗೆ ಹೋಗಬೇಕೆಂದು ಸಿದ್ಧವಾಗಿದ್ದೆ. ಆದರೇ ಆವಾಗಲೇ ನನ್ನ ಸೋದರನಿಗೆ ತೀವ್ರವಿದ್ಯುದ್ಘಾತವಾಗಿ ಮೃತನೆಂದು ಜನರು ಹೇಳಿದರು. ನಾನು ದಿಗ್ಭ್ರಾಂತನಾದೆ. ದುಃಖದಿಂದನನಗೆ ಕೈಕಾಲುಕದಲಿಸಲಿಕ್ಕೆ ಆಗಲಿಲ್ಲ. ಆವಾಗ ತತ್ ಕ್ಷಣವೇ ತಾಲ್ವೋಷ್ಠಪುಟ ವ್ಯಾಪಾರದಿಂದ ಪ್ರತ್ಯಕ್ಷರಾಗಿ "ನಿಮ್ಮಸೋದರನಿಗೆ ಮೃತ್ಯುವಿಲ್ಲ" ಎಂದುಹೇಳಿ ಶ್ರೀವಿದ್ಯಾಪಯೋನಿಧಿ ತೀರ್ಥ ಸ್ವಾಮಿಗಳು ಪ್ರಾಣದಾನಮಾಡಿದರು. ಇದು ನನ್ನು ಪ್ರತ್ಯಕ್ಷಸ್ವಾನುಭವವು.

ಮೂ. *ಪಾಪೌಘಧ್ವಾಂತ ವಿಧ್ವಂಸ ಭಾಸ್ಕರಾಯಿತ ವಿಗ್ರಹಮ್ ॥*

*ಪ್ರಣೌಮ್ಯಹಂ ಸದಾ ವಿದ್ಯಾಪಯೋನಿಧಿ ಗುರೂತ್ತಮಮ್ ॥* 3

ಮಹಾಪಾಪಗಳೆಂಬೋಗಾಢಾಂಧ ಕಾರವನ್ನು ಭೇದಿಸುವ ಪ್ರಚಂಡ ಸೂರ್ಯನಂತೆ ಪವಿತ್ರ ದೇಹವುಳ್ಳವರಾದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಗಳವರ ಚರಣಕಮಲಗಳನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ. ಆದಕೋಸ್ಕರವೇ ಶ್ರೀಗಳವರು ಗುರೂತ್ತಮರು.

*ಮೂ॥ ವಿದ್ಯಾಪ್ರಸನ್ನ ತೀರ್ಥ ಶ್ರೀಕರಾಬ್ಜೋತ್ಥಂ ತಪೋನಿಧಿಮ್ ॥*
*ಪುಣ್ಯವಂತಂ ಭಜೇ ವಿದ್ಯಾಪಯೋನಿಧಿ ಗುರೂತ್ತಮಮ್ ॥* 4

ಜಗದ್ಗುರುಗಳಾದ ಶ್ರೀವಿದ್ಯಾಪ್ರಸನ್ನ ತೀರ್ಥಮಹಾಸ್ವಾಮಿಗಳ ಶ್ರೀಕರ ಕರಕಮಲ ಸಂಜಾತರು, ಯತಿಶ್ರೇಷ್ಠರು, ಮಹಾಪುಣ್ಯಶಾಲಿಗಳೂ ಆದ ಶ್ರೀಮದ್ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರ ಚರಣಕಲಮಲ ಗಳನ್ನು ಸೇವಿಸುತ್ತೇನೆ.

*ಮೂ॥ ಸಂಸಾರೋದನ್ವದುತ್ತಾರ ಯಾನಪಾತ್ರಂ ಗುರೂರಸಮ್ ॥* ★
*ನವ್ಯಂ ಪರಿಮಲಾಚಾರ್ಯಂ ನೌಮಿ ವಿದ್ಯಾಪಯೋನಿಧಿಮ್ ॥* 5

ಸಂಸಾರವೆಂಬೋ ಮಹಾಸಾಗರದಿಂದ ಸಾತ್ವಿಕರನ್ನು ದಾಟಿಸಲು ಪವಿತ್ರವಾದ ಯಾನ ಪಾತ್ರೆ-ಅಂದರೇ ನಾವೆ ರೂಪದಲ್ಲಿದ್ದಗುರು ಶ್ರೇಷ್ಠರೂ ಆದಮತ್ತು ಜ್ಞಾನಿಗಳ ಲೋಕದಲ್ಲಿ ನವೀನ ಪರಿಮಳಾಚಾರ್ಯರೆಂಬೋ ವಿಖ್ಯಾತಿಯುಳ್ಳ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರ ಚರಣಕಮಲಗಳನ್ನು ಭಕ್ತಿಯಿಂದ ಆಶ್ರಯಿಸುತ್ತೇನೆ.

★ ಗುರೂರಸಮ್ = ಗುರುಶ್ರೇಷ್ಠಃ ("ಅಗ್ರಾಖ್ಯಾಯಾಮುರಸಃ" ಇತಿಟಚ್) ಕ್ಲೀಬತಾ ॥

*ಮೂ॥ ಧನ್ಯೋ ಧನ್ಯತಮೋ ವದಾನ್ಯಚರಿತಃ ಸನ್ಮಾರ್ಗಬದ್ಧಾದರಃ*
*ವೈರಾಗ್ಯಾಂಕುರವರ್ಧನೇ ಜಲಧರಃ ಪ್ರಜ್ಞಾಪ್ರಕರ್ಷೋಜ್ಜ್ವಲಃ ॥*
*ಪ್ರಾಜ್ಞೋ ಮಧ್ವಮತಾವನಃ ಸುನಿತರಾಂ ಪ್ರೌಢಪ್ರತಾಪೋದ್ಧುರಃ*
*ಸೋಽಯಂ ಪಾತು ಮಹಾನಮಂದವಿಭವೋ ವಿದ್ಯಾಪಯೋಧಿವ್ರತೀ ॥* 6

ಧನ್ಯರು, ಧನ್ಯಾತಿಧನ್ಯರು, ಅತ್ಯಂತ ಶುದ್ಧಚರಿತ್ರೆಯುಳ್ಳವರು, ಜ್ಞಾನಿಜನಸೇವಿತ ಸನ್ಮಾರ್ಗದರ್ಶನ ಮಾಡುವದರಲ್ಲಿ ಬದ್ಧಾದರರೂ, ಸಾತ್ವಿಕರಲ್ಲಿ ವೈರಾಗ್ಯವೆಂಬೋ ಅಂಕುರವನ್ನು ವೃದ್ಧಿಮಾಡಲು ಸ್ವಚ್ಛಮೇಘದಂತೇ ಇರುವವರು, ಶುದ್ಧಜ್ಞಾನದಿಂದ ದೇದೀಪ್ಯಮಾನವಾಗಿ ಪ್ರಕಾಶಿಸುವರು, ಪ್ರಾಜ್ಞರು, ಶ್ರೀಮಧ್ವಮತಸಂರಕ್ಷಕರು, ಪ್ರೌಢಪಾಂಡಿತ್ಯ ಪ್ರತಾಪದಿಂದಜಾಜ್ವಲ್ಯಮಾನರೂ ಬಹುಪ್ರಸಿದ್ಧ ಮಹಾವೈಭವಗಳುಳ್ಳವರೂ ಆದ ಶ್ರೀವಿದ್ಯಾಪಯೋನಿಧಿ ಶ್ರೀಪಾದಂಗಳವರು ನಮ್ಮ ಸದಾ

***ಮೂ. ವಾಚಂ ವಾಚಂ ಹರಿಗುಣಗಣಂ ಲಬ್ಧಕೀರ್ತಿರ್ಜನೇ ಯೋ*** ★
***ಬೋಧಂ ಬೋಧಂ ವಿಷಮವಿಷಯಂ ಜಾತಪೂಜ್ಯಪ್ರಭಾವಃ ॥***
***ವೇದಂ ವೇದಂ ಪವನಸಮಯಂ ಪ್ರಾಪ್ತಶಾಂತಸ್ವಭಾವೋ***
***ದಾಯಂ ದಾಯಂ ಸುಮತಿಮತುಲಾಂ ಪಾತು ವಿದ್ಯಾಪಯೋಧಿಃ ॥*** 7

ಸರ್ವೋತ್ತಮನಾದ ಶ್ರೀಹರಿಗುಣ ಗಣಗಳನ್ನು ಪುನಃ ಪುನಃ ಪ್ರತಿಪಾದನೆ ಮಾಡುತ್ತಾ ಜ್ಞಾನಿವರೇಣ್ಯರಲ್ಲಿ ಅಖಂಡ ಕೀರ್ತಿಯನ್ನು ಹೊಂದಿದವರು, ಶ್ರುತಿ ಸಚ್ಛಾಸ್ತ್ರಮೀಮಾಂಸಾಗಳಲ್ಲಿ ಕಠಿನಾತಿ ಕಠಿನ ವಿಷಯಗಳನ್ನು ಸೂರಿಜನರಿಗೆ ಪುನಃ ಪುನಃ ಬೋಧಿಸುತ್ತಾ ಜಗದ್ವಂದ್ಯಪದಾರವಿಂದಗಳಾಗಿರುವರು, ಪಾವನ ಪವನಾಗಮವನ್ನು ಪುನಃ ಪುನಃ ಸರ್ವರಲ್ಲಿ ಬೋಧಿಸುತ್ತಾ ಪರಮಶಾಂತ ಸ್ವಭಾವ ಯುಕ್ತರಾಗಿರುವರು, ಸಾತ್ವಿಕರಲ್ಲಿ ಶುದ್ಧಬುದ್ಧಿಯನ್ನು ಪುನಃ ಪುನಃ ದಾನಮಾಡುತ್ತಾ ಇರುವರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ನನ್ನನ್ನು ಅನುಗ್ರಹಿಸಿ ರಕ್ಷಿಸಲಿ.

★ ವಾಚಂ ವಾಚಮ್ ಇತ್ಯಾದಿಷು ''ಆಭೀಕ್ಷ್ಣ್ಯೇಣಮುಲ್ ಚ'' ಇತಿಣಮುಲ್ ಪ್ರತಯಃ ''ಆಭೀಕ್ಷ್ಣ್ಯೇದ್ವೇಭವತಃ'' ಇತ್ಯುಪ ಸಂಖ್ಯಾನಾದ್ ದ್ವಿರ್ವಚನಮ್ ॥

***ಮೂ. ಸ್ನಾಯಂ ಸ್ನಾಯಂ ಸುಪವಿತವಪುಃ ಶುದ್ಧಧೀಧ್ಯಾನಮಗ್ನಃ***
***ಪಾವಂ ಪಾವಂ ಸುಜನಸುಪಥಂ ಪೂತಕಾರ್ಯೇಷು ಲೀನಃ ॥***
***ನಾವಂ ನಾವಂ ಹರಿಗುರುವರಾನ್ ಸರ್ವಪುಣ್ಯಪ್ರಕರ್ಷೋ***
***ಧಾರಂ ಧಾರಂ ಯತಿಪತಿಪದಂ ಪಾತು ವಿದ್ಯಾಪಯೋಧಿಃ ॥*** 8

ಮಂತ್ರೋಚ್ಚಾರಣ ದಿಂದ ಪುನಃ ಪುನಃ ಸ್ನಾನಮಾಡುತ್ತಾ ಪರಮಶುದ್ಧವಾದ ಬುದ್ಧಿಯಿಂದ ಅಖಂಡ ಧ್ಯಾನಮಗ್ನ ರಾಗಿರುವವರು, ಮಧ್ವಾಧ್ವನೀನಾಧ್ವಗರಾದವರ ಮಾರ್ಗವನ್ನು ಪುನಃ ಪುನಃ ಸಂಶೋಧನೆಯನ್ನು ಮಾಡುತ್ತಾ ಪರಮ ಪವಿತ್ರ ಕಾರ್ಯಗಳಲ್ಲಿ ಸುಲೀನರಾಗಿರುವವರು, ತಾರತಮ್ಯಾನುಸಾರವಾಗಿ ಶ್ರೀಹರಿದೇವತಾಗುರು ಗಳನ್ನು ಪುನಃ ಪುನಃ ನಮನವನ್ನು ಮಾಡುತ್ತಾ ಸಕಲ ಮಹಾಪುಣ್ಯ ಗಳಿಂದ ವಿರಾಜಮಾನರಾಗಿರುವವರು ಮತ್ತು ಶ್ರೇಷ್ಠಯತಿತತ್ತ್ವಧಾರಣೆ ಯನ್ನು ಮಾಡಿ ನಿರಂತರ ಶ್ರೀವ್ಯಾಸರಾಜ ವಿದ್ಯಾ ಕರ್ನಾಟಕ ಸಿಂಹಾಸನಾಧೀಶ್ವರ ರಾಗಿರುವ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ನನ್ನನ್ನು ಅನುಗ್ರಹಿಸಿರಕ್ಷಿಸಲಿ.

***ಮೂ. ಪ್ರೀಣನ್ ಪಂಡಿತಮಂಡಲೀಮವಿರತಂ ದಾನೇನ ಕಾರುಣ್ಯತೋ***
★ ***ನಾಭೀದೇಷು ಪರಿವ್ರಜನ್ ಮುಹುರಹೋ! ತತ್ತ್ವಾಮೃತಂ ಸೇಚಯನ್ ॥***

*ಸ್ವಚ್ಛಾಂತರಂಗೋ ಗುರುಃ*

*ಶಿಷ್ಯಾಣಾಂ ಪ್ರದಿಶನ್ ವಿಶುದ್ಧಮತಿತಾಂ ಸ್ವಚ್ಛಾಂತರಂಗೋ ಗುರುಃ*
*ಶಿಷ್ಯಾಣಾಂ ಪ್ರದಿಶನ್ ವಿಶುದ್ಧಮತಿತಾಂ ವಿದ್ಯಾಪಯೋಧಿವ್ರತೀ ॥* 9
*ಶಾಸ್ತಿ ಶ್ರೀಮತ್ಸಾರ್ವಭೌಮಪದಗೋ ವಿದ್ಯಾಪಯೋಧಿವ್ರತೀ*

ಮಹಾಪಂಡಿತ ಸಮೂಹವನ್ನು ಕಾರುಣ್ಯದಿಂದ ತೃಪ್ತಿಪಡಿಸುತ್ತಾ, ಸಂತತ ಸತ್ಪಾತ್ರದಾನದಿಂದ ಯೋಗ್ಯರನ್ನು ಅನುಗ್ರಹಿಸುತ್ತಾ, ಸಂಪೂರ್ಣ ಭಾರತದೇಶ ವನ್ನು ಸಂಚರಿಸಿ ಸತ್ತತ್ತ್ವಾಮೃತವರ್ಷಣವನ್ನು ನಿತ್ಯವು ಮಾಡುತ್ತಾ, ಯೋಗ್ಯ ಶಿಷ್ಯರಲ್ಲಿ ವಿಶುದ್ಧಜ್ಞಾನೋಪದೇಶವನ್ನು ಮಾಡುತ್ತಾ ಸ್ವಚ್ಛಾಂತರಂಗದಿಂದ ಜಗದ್ಗುರುಗಳಾದ ಶ್ರೀವಿದ್ಯಾಪಯೋನಿಧಿ ಶ್ರೀಪಾದಂಗಳವರು ವಿದ್ಯಾಸಿಂಹಾಸನಾಧೀಶ್ವರರಾಗಿ ಶಾಸನಮಾಡುತ್ತಿರುವರು.

★ ನಾಭೀದೇಷು = ಭಾರತೆ । "ನಾಭೀದಂ ಭಾರತಂ ವರ್ಷಮ್" ಇತಿ ವೈಜಯಂತೀ । ವಿಷಯವಾಚಿತ್ವಾದಾದರಾದ್ವಾ ಭೂಮ್ನಿ ಪ್ರಯೋಗಃ ॥

ಮೂ. *ಸಿದ್ಧಾಂತೋದಧಿ ಮಂಥನೋತ್ಥವಿಮಲಜ್ಞಾನಾದಿ ರತ್ನವ್ರಜಂ*
*ಶಿಷ್ಯೇಭ್ಯೋ ವಿತರನ್ ಚಕಾಸ್ತಿ ಮುನಿರಾಟ್ ಕಾರುಣ್ಯವಾರಾಂನಿಧಿಃ ॥*
*ದರ್ಪಂ ಪಂಡಿತಮಾನಿನಾಂ ವಿದಲಯನ್ ಮಾಯೀಭಪಂಚಾನನಃ*
*ಸೋ ಽ ಸೌಮದ್ಗುರುರನ್ವಹಂ ವಿಜಯತಾಂ ವಿದ್ಯಾಪಯೋಧಿವ್ರತೀ ॥* 10

ಸತ್ಸಿದ್ಧಾಂತವೆಂಬೋ ಮಹಾಸಮುದ್ರವನ್ನು ಮಥಿಸಿ ವಿಮಲ ತತ್ತ್ವಜ್ಞಾನಾದಿ ಗಳೆಂಬೋರತ್ನಗಳ ಸಮೂಹವನ್ನು ಯೊಗ್ಯಶಿಷ್ಯರಿಗೆ ವಿತರಣೆಮಾಡುತ್ತಾ, ಮುನಿಪುಂಗವರು ಕರುಣಾ ಪೂರ್ಣಾಂತರಂಗರಾಗಿ ಪ್ರಕಾಶಮಾನರಾಗಿದ್ದಾರೆ. ಮತ್ತು ಗರ್ವ ಯುಕ್ತ ಪಂಡಿತ ಮಾನಿಗಳ ದರ್ಪವನ್ನು ವಿದಲನ ಮಾಡುತ್ತಾ ಮಾಯಿ ಗಳೆಂಬೋಗಜಗಳಿಗೆ ಉಗ್ರಸಿಂಹ ರೂಪದಿಂದಿರುವವರಾಗಿ ನನ್ನ ಪೂಜ್ಯಗುರುಗಳೂ ಆದ ಶ್ರೀ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ನಿರಂತರೆ ವಿಜಯಶೀಲಿಗಳಾಗಿರಲಿ.

ಮೂ. *"ಮಾಯಾವಾದಮತಂ ತ್ಯಜ, ಶ್ರಯಹರಿಂ, ಸೇವಸ್ವಮಧ್ವಂ ಗುರುಂ*
*ಸಚ್ಛಾಸ್ತ್ರಶ್ರವಣಂ ಕುರು, ಶ್ರುತಿಮತಿಃ ಸನ್ಮಾರ್ಗಗಾಮೀ ಭವ" ॥*
*ಏವಂ ತಾವಕಬೋಧನಂ ಮಮ ಮನೋದಾರ್ಢ್ಯಾಯ ಭೂಯಾತ್ ಸದಾ*
*ಪ್ರಾತರ್ವಂದ್ಯ ! ನಮೋನಮೋ ಮಮ ಗುರೋ ! ವಿದ್ಯಾಪಯೋಧಿವ್ರತಿನ್ ॥*

ದುಷ್ಟ ಸಿದ್ಧಾಂತ ವಾದ ಮಾಯಾವಾದ ವನ್ನು ಬಿಡು, ಶ್ರೀಹರಿ ಸರ್ವೋತ್ತಮತತ್ತ್ವವನ್ನು ಪ್ರತಿಪಾದನೆ ಮಾಡುತ್ತಾ ಶ್ರೀಹರಿಯನ್ನು ಸಮಾಶ್ರಯಿಸು, ಜೀವೋತ್ತಮರಾದ ಶ್ರೀಮಧ್ವದೇವರನ್ನು ಸೇವಿಸು, ನಿರಂತ ಸಚ್ಛಾಸ್ತ್ರ ಶ್ರವಣೆ ಯನ್ನುಮಾಡು, ವೇದಗಳಲ್ಲಿ ಪ್ರಾಮಾಣ್ಯ ಬುದ್ಧಿಯನ್ನಿಟ್ಟುಕೋ, ಸೂರಿಜನಸೇವಿತ ಮಾರ್ಗವನ್ನು ಬಿಡಬೇಡ,

ಬಿಟ್ಟುಕೆಡಬೇಡ, ಹೇ! ಪ್ರಾತರ್ಸ್ವಂಧ್ಯರೇ! ಇಂಥಾ ನಿಮ್ಮ ಮಹಾರ್ಘವಾದ ಸದುಪದೇಶಗಳು ನಿರಂತರ ನನ್ನ ಮನೋದಾರ್ಢ್ಯದಕೊಸ್ಕರ ಇರಲಿ. ಶ್ರೀವಿದ್ಯಾಪಯೋನಿಧಿ ತೀರ್ಥ ಗುರುಗಳೇ ನಿಮಗೆ ಪುನಃ ಪುನಃ ಸಾಷ್ಟಾಂಗ ನಮಸ್ಕಾರಗಳು.

ಮೂ. "ಸರ್ವಾನಿಷ್ಟನಿವಾರಣಂ ಭವಭಯಾದ್ದೂರೀಕೃತಿರ್ನಿಶ್ಚಯಾತ್
ಸ್ಯಾದೇವೇತಿ ಮಹಾಗುರೋಃ ಪ್ರತಿದಿನಂ ಪಾದೋದಸಂಸೇವನಾತ್" ॥
ಇತ್ಯಾದ್ಯಾಹ ನಿಷೇವಣಾಪ್ತಸುಫಲಃ ಸರ್ವೋಜನೋ ಭಕ್ತಿತಃ
ಕಲ್ಯಾಣಂ ದದತಂ ಶ್ರಯೇ ತಮನಿಶಂ ವಿದ್ಯಾಪಯೋಧಿಂ ಗುರುಮ್ ॥ 12

ಮಹಾಗುರುಗಳಾದ ಶ್ರೀವಿದ್ಯಾಪಯೋನಿಧಿ ತೀರ್ಥರ ಪಾದೋದಕ ಸೇವನದಿಂದ ಸಕಲಾನಿಷ್ಟ ನಿವಾರಣೆ ಗಳಾಗುತ್ತವೆ, ನಿಶ್ಚಯದಿಂದ ಸಂಸಾರ ಭಯವೂ ದೂರವಾಗುತ್ತದೆ, ಎಂದು ಸಕಲ ಪ್ರಾಪ್ತ ಶುಭಫಲರಾದ ಮಹಾಭಕ್ತರು ಪ್ರತಿನಿತ್ಯ ಘಂಟಾ ಘೋಷವಾಗಿ ಪ್ರಕಟಿಸುತ್ತಾರೆ. ಅಂಥಾಸಕಲ ಮಂಗಳಗಳನ್ನು ಪ್ರಸಾದಿಸುವ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಲಳ ವರನ್ನು ನಿರಂತರ ಸಮಾಶ್ರಯಿಸುತ್ತೇನೆ.

ಮೂ. ನಾವಂ ನಾವಮಮಂದಬೋಧ ಭಗವತ್ಪಾದಾರ್ಯಹೃನ್ಮಂಡಲಂ
ಪ್ರಾಧ್ಯಾಸೀನಮನಂತಸಾಂದ್ರಗುಣಿನಂ ಗೋಪಾಲಕೃಷ್ಣಂ ವಿಭುಮ್ ॥
ಪಾಯಂ ಪಾಯಮಿಹಾನಿಶಂ ಶುಭಮತಿಸ್ತತ್ಪಾದಕಂ ಜೋದ್ಭವಂ
ಸೋ ವ್ಯಾಸ್ಮಾಂ ಗುರುರಾಣ್ಮುದಾ ಮುಹುರಹೋ! ವಿದ್ಯಾಪಯೋಧಿವ್ರತೀ ॥

ಶ್ರೀಮನ್ಮಧ್ವಭಗವತ್ಪಾದಾಚಾರ್ಯರ ಹೃನ್ಮಂಡಲಾಸೀನನು, ವಿಭುವು, ಸರ್ವೋತ್ತಮನು, ಅನಂತಗುಣಸಾಂದ್ರನು ಆದ ಶ್ರೀಮೂಲಗೋಪಾಲಕೃಷ್ಣನನ್ನು ಪುನಃ ಪುನಃ ನಮಸ್ಕರಿಸುತ್ತಾ, ಸೇವಿಸುತ್ತಾ, ಶ್ರೀಮೂಲ ಗೋಪಾಲಕೃಷ್ಣನ ಪಾದ ಕಮಲೋದ್ಭೂತ ಗಂಗಾತೀರ್ಥ ನಿಷೇವಣೆಮಾಡುತ್ತಾ ನಿರಂತರ ಶುದ್ಧಮತಿಗಳು, ಗುರುಶ್ರೇಷ್ಠರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ನನ್ನನ್ನು ಸದಾಪಾಲಿಸಲಿ.

ಮೂ. "ಭಕ್ತೇಃ ಶ್ರೀರಮಣೇ ವಿನೀತಮನಸಾಂ ಪ್ರೋದ್ಧಾರಣಂ ದರ್ಶನಾದ್
ಮಾಯಾಮೋಹ ವಿದಾರಣಂ ಶ್ರುತಿಪಥಾದುಷ್ಟಂ ಚ ಮಾನಾಚ್ಚ್ಯುತಮ್ ।
ಅದ್ವೈತಾರ್ಯಜನೈರ್ವಿಬುಧ್ಯ ಪವನಾಚಾರ್ಯೋಕ್ತಮಾಸೇವ್ಯತಾಮ್"
ಇತ್ಯಾಘೋಷಣಶಾಲಿನಂ ಯತಿವರಂ ವಿದ್ಯಾಪಯೋಧಿಂ ಭಜೇ ॥ 14

"ಶ್ರೀಹರಿಯಲ್ಲಿ ಶುದ್ಧಭಕ್ತಿ ವುಳ್ಳವರಿಗೆ ಶ್ರೀಹರಿದರ್ಶನವಾಗಿ ಮಾಯಾ ಮೋಹವಿನಾಶವಾಗುತ್ತದೆ. ವಿನೀತ ಮನಸ್ಕರಾದ ಸಾತ್ವಿಕರಿಗೆ ಉದ್ಧಾರವಾಗುತ್ತದೆ. ಇದು

ತಿಳಿದುಕೊಂಡು ಶ್ರೀಮನ್ಮಧ್ವಗುರೂಪದಿಷ್ಟವಾದ ಮಾರ್ಗವನ್ನು ಅನುಸರಿಸಿರಿ. ಈ ವಿಧವಾಗಿ ಘಂಟಾಘೋಷದಿಂದ ಪ್ರಕಟಿಸುವ ಯತಿವರೇಣ್ಯರಾದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರ ಚರಣಕಮಲಗಳನ್ನು ಸೇವಿಸುತ್ತೇನೆ.

ಮೂ. ***ಮಾಯೀಲಾಧ್ರವಿಪಾಟನೇ ಪಟುತರೋ ಜಂಭಾರಿದಂಭೋಲಿಕೋ । ★***
***ದುಸ್ತರ್ಕ್ಯೋರಗಮಂಡಲೀಸ್ಮೃತಫಟಾಟೋಪಾಯ ಸಜ್ಜಾಂಗುಲಿಃ ।***
***ಸತ್ತತ್ತ್ವಾಮೃತವಾರಿರಾಶಿಲಸನೇ ರಾಕೇಂದುಬಿಂಬೋ ವತಾತ್***
***ಶ್ರೀಮಧ್ವಾಗಮಸಿದ್ಧಭವ್ಯವಿಭವೋ ವಿದ್ಯಾಪಯೋಧಿವ್ರತೀ ॥*** 15

ಮಾಯಾವಾದಿ ಗಳೆಂಬೋ ಮಹಾಪರ್ವತಗಳನಾಶನ ಮಾಡಲು ಮಹಾಶಕ್ತಿ ಸಂಪನ್ನ ವಾದ ದೇವೇಂದ್ರನ ವಜ್ರಾಯುಧ ರೂಪದಲ್ಲಿದ್ದವರು, ದುಷ್ಟತಾರ್ಕಿಕರೆಂಬೋ ಮಹಾವಿಷಸರ್ಪಗಳಿಗೆ ಭಯಂಕರವಾದಗಾರುಡಿಕ ರೂಪದಲ್ಲಿದ್ದವರು, ಸತ್ತತ್ತ್ವಾಮೃತವೆಂಬೋಮಹಾದಿವ್ಯ ಸಮುದ್ರಕ್ಕೆ ವೃದ್ಧಿಮಾಡಲು ಪೂರ್ಣಚಂದ್ರರೂಪದಲ್ಲಿದ್ದವರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ನನ್ನನ್ನು ಸದಾ ಕರುಣೆಯಿಂದ ರಕ್ಷಣೆ ಮಾಡಲಿ.

★ ಇಲಾಧ್ರಃ = ಪರ್ವತಃ । ಜಂಭಾರಿದಂಭೋಲಿಕಃ = ಇಂದ್ರಸ್ಯವಜ್ರಾಯುಧಃ ॥

ಮೂ. ***ತಂತ್ರೋಕ್ತೇನ ಪಥಾ ವಿಚಾರ್ಯ ವಿಧಿವತ್ ತನ್ವನ್ ಗುರುಗ್ರಾಮಣೀಃ***
***ಶ್ರೀಶಾರಾಧನಮನ್ವಹಂ ನನುಜಪನ್ ಮಂತ್ರಾಂಶ್ಚ ಭಕ್ತ್ಯಾಮುದಾ ।***
***ಅಧ್ಯಾತ್ಮಂ ಸುಜನೇ ಪ್ರದಿಶ್ಯಕೃಪಯಾ ತ ದ್ರೂಪಮುದ್ಧಾರಯನ್***
★ ***ಜೇಜೀಯಾನ್ನಮ ಸೇವ್ಯದಿವ್ಯ ಚರಣೋ ವಿದ್ಯಾಪಯೋಧಿವ್ರತೀ ॥*** 16

ಶ್ರೀಮನ್ಮಧ್ವಗುರುಗಳ ತಂತ್ರಸಾರೋಕ್ತ ಪದ್ಧತಿಯನ್ನು ಅನುಸರಿಸಿ ಮತ್ತು ಶ್ರೀವ್ಯಾಸರಾಜ ಮಠ ಸಂಪ್ರದಾಯವನ್ನೂ ಅನುಸರಿಸಿ ವಿಧಿವಿಧಾನದಿಂದ ಶ್ರೀಹರಿಪೂಜಾದಿ ಗಳನ್ನು ನಿರ್ವಹಿಸುತ್ತಾ, ತಂತ್ರೋಕ್ತ ಮಂತ್ರಗಳನ್ನು ನಿರಂತರ ಭಕ್ತಿ ಸಂತೋಷ ಗಳಿಂದ ಜಪಮಾಡುತ್ತಾ, ಮೋಕ್ಷಪ್ರದವಾದ ಅಧ್ಯಾತ್ಮ ವಿದ್ಯೆಯನ್ನು ಸಾತ್ವಿಕಜನರಲ್ಲಿ ಉಪದೇಶಮಾಡಿ ಆ ಸಾತ್ವಿಕರ ಸ್ವರೂಪೋದ್ಧಾರ ವನ್ನು ಅತ್ಯಂತಕರುಣೆಯಿಂದ ಮಾಡುತ್ತಾ ಸಜ್ಜನರಿಂದ ಸೇವ್ಯಗಳಾದ ದಿವ್ಯವಾದ ಪದ್ಮಯುಗಳರಾದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ಪುನಃ ಪುನಃ ಲೋಕದಲ್ಲಿ ಜಯಶೀಲಿಗಳಾಗಿ ಪ್ರಕಾಶಿಸಲಿ.

ಮೂ. ***ಕಾವ್ಯೇ ವ್ಯಾಕರಣೇ ಪುರಾಣ ವಿಷಯೇ ವೇದೇ ತಥಾ ದರ್ಶನೇ***
***ತರ್ಕೇ ಛಂದಸಿ ಮಧ್ವತಂತ್ರನಿವಹೇ ಶಿಕ್ಷಾನಿರುಕ್ತಾದಿಕೇ ।***

*ಮೀಮಾಂಸಾ ಪರಿವಿಸ್ತರೇ ಪರಿವೃಢಃ ಕಲ್ಪೇಸ್ಮೃತೌ ಜ್ಯೋತಿಷೇ ।*
*ಬೋಧಾನಃ ಸ ಪುನಾತು ಮಾಮ್ ಉಪದಿಶನ್ ವಿದ್ಯಾಪಯೋಧಿವ್ರತೀ ॥* 17

★

ಕಾವ್ಯ, ವ್ಯಾಕರಣ, ಪುರಾಣ, ವೇದ, ದರ್ಶನಶಾಸ್ತ್ರ, ತರ್ಕ, ಛಂದಶ್ಶಾಸ್ತ್ರ, ಪರಮಪಾವನ ಪವನಾಗಮನಿವಹ, ಶಿಕ್ಷಾ, ನಿರುಕ್ತ ಮೀಮಾಂಸಾ, ಕಲ್ಪ ಸ್ಮೃತಿ, ಜ್ಯೋತಿಷಾದಿ ಸಕಲ ಶಾಸ್ತ್ರಗಳಲ್ಲಿ ನಿಷ್ಣಾತರು ಪರಿವೃಢರೂ ಆಗಿರುವ ಮತ್ತು ಸತ್ತತ್ತ್ವೋಪದೇಶ ಕರಲ್ಲಿ ಅಗ್ರಗಣ್ಯರಾದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾಂಗಳವರು ನನಗೆ ಸಮನುಗ್ರಹ ದಿಂದ ಸತ್ತತ್ತ್ವೋಪದೇಶಗಳನ್ನು ಉಪದೇಶಮಾಡುತ್ತಾ ನನ್ನನ್ನು ಪವಿತ್ರೀಕರಿಸಲಿ.

★ ಬೋಧಾನಃ = ತತ್ತ್ವೋಪದೇಷ್ಟಾ ಗುರುಃ । '' ಗುರುರ್ಧಿಶಾನೋ ಬೋಧಾನಃ'' ಇತಿ ವೈಜಯಂತೀ ॥

ಮೂ. *ಅಜ್ಞಾನ ನಿದ್ರಾವಿದ್ರಾಣ ಸುಪ್ರಭಾತ ಪ್ರಭಾಕರಮ್ ।*
*ವಂದೇ ಗುಣೋಜ್ಜ್ವಲಂ ವಿದ್ಯಾಪಯೋನಿಧಿಗುರೂತ್ತಮಮ್ ॥* 18

★

ಅಜ್ಞಾನವೆಂಬೋ ಮಹಾನಿದ್ರೆಯನ್ನು ಕರಿಗಿಸಿ ಸಾಧಕನನ್ನು ಎಚ್ಚರಿಕೆ ಮಾಡಿಸುವ ಪ್ರಚಂಡ ಸೂರ್ಯರಾಗಿರುವವರು, ಸಕಲ ಸದ್ಗುಣಗಳಿಂದ ಮಹೋಜ್ಜ್ವಲರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರನ್ನು ಭಕ್ತಿಯಿಂದ ಸ್ತುತಿಸುತ್ತೇನೆ. ಮತ್ತೂ ಆವರ ಪವಿತ್ರಪಾದಕಮಲಗಳಲ್ಲಿ ಸಾಷ್ಟಾಂಗದಂಡ ಪ್ರಣಾಮವನ್ನು ಸಲ್ಲಿಸುತ್ತೇನೆ.

★ (ವಂದೇ) ''ವದಿ ಅಭಿವಾದನಸ್ತುತ್ಯೋಃ, ಅಭಿವಾದನಂ ಪಾದಯೋಃ ಪ್ರಣಿಪಾತಃ, ಸ್ತುತಿಃ ॥

ಮೂ. *ಶ್ರೀಮಧ್ವನವಮೀಂ ತನ್ವನ್ ಸಂಸ್ಥಾಪ್ಯ ಸ್ವಮಠಾನ್ ಬಹೂನ್ ।*
*ಮಾಂ ಪುನಾತುಸದಾ ವಿದ್ಯಾಪಯೋನಿಧಿ ಗುರೂತ್ತಮಃ ॥* 19

ಶ್ರೀಮನ್ಮಧ್ವನವಮೀ ಮಹೋತ್ಸವಗಳನ್ನು ಸರ್ವತ್ರ ವಿಜೃಂಭಣೆ ಯಿಂದ ವಿಸ್ತಾರವಾಗಿ ನಿರ್ವಹಿಸುತ್ತಾ ಶ್ರೀಮಠಗಳನ್ನು ಸರ್ವತ್ರ ಕರುಣೆಯಿಂದಸ್ಥಾಪನೆಮಾಡಿ ಸಾತ್ವಿಕಭಕ್ತಜನರನ್ನು ಸಮುದ್ಧರಿಸುತ್ತಾ ವಿರಾಜಮಾನರಾದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ಸರ್ವದಾ ಕರುಣೆಯಿಂದ ನನ್ನನ್ನು ಪವಿತ್ರಗೊಳಸಲಿ!

ಮೂ. *ಸಂಸೇವ್ಯಯಂ ಸುಮನಸಾ ಪುರುಷಾಃ ಸ್ತ್ರಿಯೋ ವಾ*
*ಕಲ್ಯಾಣ ಕಲ್ಪತರುಮುಕ್ತಿಫಲಾನ್ಯುಪೇಯುಃ ।*
*ಶ್ರೀವ್ಯಾಸರಾಜಮಠಪಂ ಸುತರಾಂ ಮನೋಜ್ಞಂ*
*ವಿದ್ಯಾಪಯೋನಿಧಿಗುರುಂ ತಮಹಂ ಸ್ಮರಾಮಿ ॥* 20

ಪರಿಶುದ್ಧವಾದ ಮನಸ್ಸಿನಿಂದ (ಸುಮನಸಾ=ಶುದ್ಧಮನಸ್ಸಿನಿಂದ) ಪುರುಷರಾಗಲೀ ಸ್ತ್ರೀಯರಾಗಲೀ ಯಾ ಶ್ರೀಗುರು ಗಳನ್ನು ಭಕ್ತಿಯಿಂದ ಸೇವೆಮಾಡಿ ಕಲ್ಯಾಣ ಕಲ್ಪತರುರೂಪ ಶ್ರೀಹರಿಕೃಪಾ ಫಲವನ್ನು ಹೊಂದಿ ಮುಕ್ತಿ ಯೋಗ್ಯರಾಗಿ ವಿರಾಜಮಾನ-ರಾಗಿರುವರೋ ಅಂಥಾ ಮಹಾತಪಸ್ಸಂಪನ್ನರು, ಜ್ಞಾನ ಭಕ್ತಿ ವೈರಾಗ್ಯಗಳಿಂದ ಅತ್ಯಂತಮನೋಹರರು, ಶ್ರೀವ್ಯಾಸರಾಜ ಮಠಾಧೀಶರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀ ಪಾದಂಗಳವರನ್ನು ಭಕ್ತಿಯಿಂದ ಸ್ಮರಣೆಮಾಡಿ ಶರಣುಹೋಗುತ್ತೇನೆ.

**ಮೂ.** ***ಶ್ರೀಮಧ್ವಾಗಮಗಂ ಪ್ರಮೇಯನವಕಂ ಸದ್ಯುಕ್ತಿಭಿಃ ಖ್ಯಾಪಯನ್***
***ವೈಷಮ್ಯೇನ ವಿಹೀನ ವಿಷಗುಣವಾನ್ ಪೀಯೂಷವರ್ಷೀಪ್ರಧೀಃ ॥***
***ಸಂಪ್ರಾಪ್ತಃ ಕನಕಾಭಿಷೇಕಮತುಲಂ ಕರ್ಮಂದಿರಾಡ್ಭ್ಯೋಮುದಾ***
***ಸೋಯಂ ಶ್ರೀಗುರುರಾಟ್ ಸದಾವಿಜಯತೇ ವಿದ್ಯಾಪಯೋಧಿವ್ರತೀ ॥ 21***

ಶ್ರೀಮದ್ವ್ಯಾಸರಾಜತೀರ್ಥ ಪ್ರಣೀತವಾದ ಶ್ರೀಮಧ್ವಸಿದ್ಧಾಂತದ ಒಂಬತ್ತು ಪ್ರಮೇಯಗಳನ್ನು ಸದ್ಯುಕ್ತಿಗಳಿಂದ ವಿದ್ವಲ್ಲೋಕದಲ್ಲಿ ಪ್ರಸಾರಮಾಡುತ್ತಾ, ವೈಷಮ್ಯಾದಿದೋಷಗಳಿಂದ ವಿಹೀನರಾಗಿರುವರು, ಇಚ್ಛಾವಂತರು, ಮಹೋಜ್ಜ್ವಲಗುಣವಂತರು, ಪ್ರಕೃಷ್ಟ ವಿಜ್ಞಾನಶಾಲಿಗಳಾಗಿ ಅಮೃತವರ್ಷಣೆ ಮಾಡುತ್ತಾ ನಿರಂತರ ಶ್ರೀಹರಿಧ್ಯಾನಾಸಕ್ತರು, ಪ್ರಾಜ್ಞರಾದ ಮಾಧ್ವಕರ್ಮಂದೀಶ್ವರರಿಂದ ಅಭೂತಪೂರ್ವವಾಗಿ ಪರಮವೈಭವ ದಿಂದ ಕನಕಾಭಿಷೇಕವನ್ನು ಸಂತೋಷದಿಂದ ಘನವಾಗಿ ಮಾಡಿಸಿಕೊಂಡಿರುವರು, ಜಗತ್ಪ್ರಸಿದ್ಧರೂ ಆದ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರು ಶ್ರೀಗುರುರಾಜ ರಾಗಿ ಲೋಕದಲ್ಲಿ ವಿರಾಜಮಾನರಾಗಿರುವರು.

**ಮೂ.** ***ಶ್ರೀವ್ಯಾಸತ್ರಯಬೋಧನೇ ತ್ರಿಜಗತೀಪ್ರಖ್ಯಾತಕರ್ಮಂದಿರಾಟ್,***
***ತತ್ತ್ವಜ್ಞಾನಸಮಿತದ್ರುಪಾರ್ವಣವಿಧುಃ ಸೌಜನ್ಯವಾರಾಂನಿಧಿಃ ।***
★ ***ಶ್ರೀಮಾನ್ ಭಾಗವತಸ್ತ್ವದೀಯಕರಜೋ ವಿದ್ಯಾಸುವಾಚಸ್ಪತಿಃ***
***ಸೋಯಂತ್ವತ್ಕೃಪಯಾ ಸದಾ ವಿಜಯತೇ ವಿದ್ಯಾಪಯೋಧಿವ್ರತಿನ್ ! ॥ 22***

ಸಕಲ ವಿದ್ವನ್ಮಾನ್ಯಗಳಾದ ಮಹಾಗ್ರಂಥಗಳೂ ಆದ ಶ್ರೀತಾತ್ಪರ್ಯ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಗಳನ್ನು ಪ್ರವಚನ ಮಾಡುವದರಲ್ಲಿ ಮುಲ್ಲೋಕಗಳಲ್ಲಿ ಪ್ರಖ್ಯಾತರಾದ ಯತಿಶ್ರೇಷ್ಠರು, ತತ್ತ್ವಜ್ಞಾನ ವೆಂಬೋ ಮಹಾಸಮುದ್ರದವೃದ್ಧಿಗೆ ಪೂರ್ಣಚಂದ್ರರು, ಸೌಜನ್ಯ ಕಾರುಣ್ಯ ಕ್ಷೀರಸಾಗರರು, ಪೂಜ್ಯರು, ಶ್ರೀಮದ್ಭಾಗವತ ಪ್ರವಚನ ದೀಕ್ಷಾದಕ್ಷರು ಆದ ಶ್ರೀವಿದ್ಯಾವಾಚಸ್ಪತಿ ತೀರ್ಥರು ನಿಮ್ಮ ಕರಕಮಲ ಸಂಜಾತರೇ. ಅಂಥಾ ನಿಮ್ಮ ಪ್ರಿಯಶಿಷ್ಯರು ನಿಮ್ಮ ಕರುಣಾಲೇಶದಿಂದ ಲೋಕದಲ್ಲಿ ಸದಾ ವಿಜಯಶೀಲಿಗಳಾಗಿರುವರು. ಅಂಥಾ ಅಗಮ್ಯ ಮಹಿಮೋಪೇತರಾದ

ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರೇ! ನನ್ನನ್ನು ತಾವು ಕರುಣೆಯಿಂದ ಕಾಪಾಡಿರಿ.

★ ಭಾಗವತಃ= ಭಾಗವತ ಗ್ರಂಥಃ ಪ್ರವಚನ ವಿಷಯತ್ವೇನಾಸ್ಯಾಸ್ತೀತಿ ಭಾಗವತಃ, ಮತ್ವರ್ಥೀಯೋಽಕಾರಃ ॥

ಮೂ. ತ್ವನ್ನಾಮ್ನೋ ಜಪನಂ ಹಿ ಭೀತಿಹರಣಂ, ರೋಗೋಪಸರ್ಗಾಪಹಂ,
ಸಂಸಾರಾನಲದಾಹಶಾಂತಿಸಲಿಲಂ, ದಾರಿದ್ರ್ಯನಿರ್ಮೂಲನಮ್ ।
ಮೃತ್ಸ್ನಾ ತೇಽಸಕಲಾರ್ತತಾಪಹರಣೇ ವೃಂದಾವನೇ ಸಂಸ್ಥಿತಾ
ದೀನಂಪಾಹಿಸದಾವಿಭೋ । ಮಮ ಗುರೋ । ವಿದ್ಯಾಪಯೋಧಿವ್ರತಿನ್ ॥23

"ಓಂ ಶ್ರೀವಿದ್ಯಾಪಯೋನಿಧಿ ತೀರ್ಥಗುರುಭ್ಯೋನಮಃ" ಎಂಬೋ ನಿಮ್ಮ ನಾಮ ಮಂತ್ರದ ಜಪವು ಸಕಲ ಭಕ್ತರಿಗೆ ಭಯನಿವಾರಕವು, ಸಕಲ ಮಹಾರೋಗಗಳ ಉಪಶಮನಕ್ಕೆ ದಿವ್ಯೌಷಧವು, ಸಂಸಾರವೆಂಬೋ ಮಹಾಜ್ವಾಲಾಗ್ನಿ ದಾಹಕ್ಕೆ ದಿವ್ಯವಾದ ಶಾಂತಿತೀರ್ಥಸಲಿಲವು, ಸಕಲ ದಾರಿದ್ರ್ಯನಿರ್ಮೂಲನಚಣವೂ ಆಗಿದೆ. ನಿಮ್ಮ ದಿವ್ಯವೃಂದಾವನ ಗತ ಪ್ರಶಸ್ತ ಮೃತ್ತಿಕಾ ಸಕಲ ದೀನ ಜನರ ಮತ್ತು ಆರ್ತಜನರ ಮಹಾತಾಪಗಳನ್ನು ಪರಿಹರಿಸಲು ದಿವ್ಯಾಮೃತವಾಗಿದೆ. ಅಂಥಾ ಮಹಾಮಹಿಮೆಗಳುಳ್ಳ ಶ್ರೀವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳವರೇ! ನನ್ನ ಗುರು ಶ್ರೇಷ್ಠರೇ! ಸಂಸಾರ ಬಂಧದಿಂದ ದೀನನಾದ ನನ್ನನ್ನು ರಕ್ಷಣೆ ಮಾಡಿ ಸಮನುಗ್ರಹಿಸಿರಿ ಶ್ರೀಮಹಾಸ್ವಾಮಿಗಳೇ!

★ ಮೃತ್ಸ್ನಾ = ಪ್ರಶಸ್ತಾ ಮೃತ್ತಿಕಾ ॥ 'ಸಸ್ನೌಪ್ರಶಂಸಾಯಾಮ್' ಇತಿಪಾಣಿನಿಃ ॥
"ಮೃತ್ಸಾಮೃತ್ಸ್ನಾ ಚ ಮೃತ್ತಿಕಾ" ಇತಿ ನಿಘಂಟುಃ ॥

ಮೂ. ಧನ್ಯ ಆನಂದತೀರ್ಥಃ ಶ್ರೀಪದ್ಮನಾಭವಿದಾಂ ಸುತಃ ।
ವಿದ್ಯಾಪಯೋನಿಧಿ ಸ್ತೋತ್ರಂ ವ್ಯಧಾಂ ದುಃಖನಿವೃತ್ತಯೇ ॥ 24

ಶ್ರೀಪದ್ಮನಾಭಸೂರಿಗಳ ಪುತ್ರನಾದ ಆನಂದತೀರ್ಥನೆಂಬೋ ಹೆಸರುಳ್ಳವನು ಮತ್ತು ಧನ್ಯನಾದನಾನು ನನ್ನದುಃಖದ ನಿವಾರಣೆ. ಶ್ರೀವಿದ್ಯಾಪಯೋನಿಧಿ ತೀರ್ಥ ಗುರುಗಳ ಸ್ತೋತ್ರವನ್ನುಮಾಡಿದ್ದೇನೆ. ಮತ್ತು ಶ್ರೀಗಳವರನ್ನು ಶರಣುಹೋಗಿದ್ದೇನೆ.

ಮೂ. ಯೇ ಪಠಂತಿ ಸದಾ ವಿದ್ಯಾಪಯೋನಿಧಿ ಗುರುಸ್ತುತಿಮ್ ।
ತೇಷಾಂ ಸರ್ವಾರ್ಥಸಿದ್ಧಿಃ ಸ್ಯಾನ್ನಾತ್ರ ಕಾರ್ಯಾವಿಚಾರಣಾ ॥ 25

ಯಾ ಭಕ್ತರಾದರೇ ಈ ಅತ್ಯುತ್ತಮ ವಾದ ಮತ್ತು ಶ್ರೀಗುರು ಪ್ರೀತಿಕರವಾದ ಶ್ರೀವಿದ್ಯಾಪಯೋನಿಧಿ ತೀರ್ಥ ಗುರುಸ್ತುತಿ ಯನ್ನು ಭಕ್ತಿ ಯಿಂದ ಪಠಿಸುತ್ತಾರೋ

ಅವರಿಗೆಲ್ಲರಿಗು ಸಕಲಾರ್ಥಗಳು ಸಿದ್ಧವಾಗುತ್ತವೆ. ಶ್ರೀಗುರುಗಳು ಪ್ರೀತರಾಗುತ್ತಾರೆ. ಈ ವಿಷಯದಲ್ಲಿ ಲೇಶಮಾತ್ರವು ಸಂಶಯಮಾಡ ಬಾರದು.

ಮೂ. **ಗುರುಭಕ್ತ್ಯಾ ಹರೌ ಭಕ್ತಿರ್ಧ್ರುವಂ ಭವತಿ ನಿರ್ಮಲಾ ।**
**ತಯಾಸರ್ವಂ ಸಮಾಪ್ನೋತಿ ತಸ್ಮಾದೇನಾಂ ಸ್ತುತಿಂ ಪಠೇತ್ ॥** 26

ಶುದ್ಧವಾದ ಶ್ರೀಗುರುಭಕ್ತಿ ಯಿಂದ ಶ್ರೀಹರಿಯಲ್ಲಿ ನಿರ್ಮಲವಾದ ಭಕ್ತಿ ಸಂಭವಿಸುತ್ತದೆ. ಅಂಥಾ ನಿರ್ಮಲವಾದ ಭಕ್ತಿಯಿಂದ ಸರ್ವೇಷ್ಟ ಗಳುಸಿದ್ಧಿ ಸುತ್ತವೆ. ಆದಕಾರಣ ಈ ದಿವ್ಯವಾದ ಶ್ರೀವಿದ್ಯಾಪಯೋನಿಧಿ ತೀರ್ಥಗುರುಸ್ತುತಿ ಯನ್ನು ಪಠಿಸಲೇ ಬೇಕು. ಇತಿಶಮ್.

ಇತಿ ಪಂಡಿತರಾಜ ಶ್ರೀಪದ್ಮನಾಭಾಚಾರ್ಯ ತನುಜನುಷಾ
ಶ್ರೀ ಆನಂದತೀರ್ಥಾಚಾರ್ಯೇಣ ಭಕ್ತ್ಯಾಸಮರ್ಪಿತಾ
ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥಗುರುಸ್ತುತಿಃ
ಸಂಪೂರ್ಣಾ
ಶ್ರೀ ಕೃಷ್ಣಾರ್ಪಣಮಸ್ತು